ಕರ್ನಾಟಕ ವಿಧಾನ ಪರಿಷತ್ತು
143 ನೇ ಅಧಿವೇಶನ 2021

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2495 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 31-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಲೋಕೋಪಯೋಗಿ ಇಲಾಖೆಯ ರಾಜ್ಯ ಹೆದ್ದಾರಿಗಳನ್ನು ಟೋಲ್ ರಸ್ತೆಗಳನ್ನಾಗಿ ಮಾಡಲು ಸರ್ಕಾರ ಚಿಂತನೆ ನಡೆಸಿದೆಯೇ; ರಾಜ್ಯದ ಯಾವ ರಸ್ತೆಗಳನ್ನು ಟೋಲ್ ರಸ್ತೆಗಳನ್ನಾಗಿ ಮಾಡಲಾಗುವುದು; | 1) ಕೆ.ಆರ್.ಡಿ.ಸಿ.ಎಲ್ ಹಾಗೂ ಕೆಶಿಫ್ ಸಂಸ್ಥೆಗಳಿಂದ ಅಭಿವೃದ್ಧಿ ಪಡಿಸಿರುವ 19 ರಸ್ತೆಗಳಲ್ಲಿ ಬಳಕೆದಾರರ ಶುಲ್ಕವನ್ನು (User Fee) ಸಂಗ್ರಹಣೆ ಮಾಡಲು ಸರ್ಕಾರಿ ಆದೇಶ ಸಂಖ್ಯೆ :ಲೋಇ 118 ಇಎಪಿ 2016 ಬೆಂಗಳೂರು ದಿನಾಂಕ:31-03-2017 ರಲ್ಲಿ ಅನುಮೋದನೆ ನೀಡಲಾಗಿದೆ.<br>2) ಹುಡ್ಕೋ (HUDCO) ಸಾಲದ ನೆರವಿನಲ್ಲಿ ಅಭಿವೃದ್ಧಿ ಪಡಿಸಲಾಗಿರುವ ಎರಡು ರಸ್ತೆಯಲ್ಲಿ ಶುಲ್ಕ ಸಂಗ್ರಹಣೆ ಮಾಡಲಾಗುತ್ತಿದೆ.<br>3) ಕರಅನಿನಿ ವತಿಯಿಂದ ಕೈಗೊಂಡ 4 ರಸ್ತೆಗಳನ್ನು ಪಿಪಿಪಿ-ಡಿಬಿಎಫ್‌ಓಟಿ-ವಿಜಿಎಫ್ ಮಾದರಿಯಲ್ಲಿ ಕೈಗೊಂಡಿದ್ದು, ನಿರ್ಮಾಣ ವೆಚ್ಚವನ್ನು ರಿಯಾಯಿತಿದಾರರು ಹೂಡಿಕೆಮಾಡಿ ಅಭಿವೃದ್ಧಿ ಪಡಿಸಿದ್ದು, ಸರ್ಕಾರದ ಅನುಮತಿಯಂತೆ ಸದರಿ ರಸ್ತೆಗಳಲ್ಲಿ ರಿಯಾಯಿತಿದಾರು ನಿರ್ಧಿಷ್ಟ ಅವಧಿಯ ವರೆಗೆ ಶುಲ್ಕ ವಸೂಲಾತಿ ಮಾಡುವರು.<br>4) ವಿಶ್ವಬ್ಯಾಂಕ್ ನೆರವಿನ ಯೋಜನೆಯಡಿಯಲ್ಲಿ ಕೆ.ಆರ್.ಡಿ.ಸಿ.ಎಲ್ ನಿಂದ ಅಭಿವೃದ್ಧಿ ಪಡಿಸಲಾದ 6 ರಸ್ತೆಗಳಲ್ಲಿ ಬಳಕೆದಾರರ ಶುಲ್ಕವನ್ನು ಸಂಗ್ರಹಿಸಲು ಸರ್ಕಾರಿ ಆದೇಶ ಸಂಖ್ಯೆ: ಲೋಇ76 ಇಎಪಿ2014 ಬೆಂಗಳೂರು ದಿನಾಂಕ: 23-03-2016 ರಲ್ಲಿ ಅನುಮೋದನೆ ನೀಡಲಾಗಿರುತ್ತದೆ.<br>(ರಸ್ತೆವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ). |
| ಆ) | ರಾಜ್ಯ ಹೆದ್ದಾರಿಗಳನ್ನು ಈ ರೀತಿಯಲ್ಲಿ ಟೋಲ್ ರಸ್ತೆಗಳನ್ನಾಗಿ ಮಾಡಿದ್ದಲ್ಲಿ ಜನರಿಗೆ ತೊಂದರೆಯಾಗುವುದಲ್ಲವೇ; ಈ ಸರ್ವೀಸ್ ರಸ್ತೆಗಳು ಮಾಡುವ ಮೊದಲು ಸರ್ವೀಸ್ ರಸ್ತೆಗಳನ್ನು ಮಾಡಲಾಗಿದೆಯೇ; ಈ ಸರ್ವೀಸ್ ರಸ್ತೆಗಳನ್ನು ಮಾಡುವುದು ಖಡ್ಡಾಯವಲ್ಲವೆ; (ಸರ್ಕಾರದ ಆದೇಶದ ಪ್ರತಿಯನ್ನು ಒದಗಿಸುವುದು) | ಕೆ.ಆರ್.ಡಿ.ಸಿ.ಎಲ್/ಕೆ.ಶಿಫ್ ವತಿಯಿಂದ ಅಭಿವೃದ್ಧಿ ಪಡಿಸಿರುವ ರಸ್ತೆಗಳ ಮೇಲೆ ಬಳಕೆದಾರರ ಶುಲ್ಕವನ್ನು ಸಂಗ್ರಹಣೆ ಮಾಡುವುದರಿಂದ ಕೆ.ಆರ್.ಡಿ.ಸಿ.ಎಲ್ ಸಂಸ್ಥೆಯನ್ನು ಆರ್ಥಿಕವಾಗಿ ಸಧೃಡಪಡಿಸಿ, ಈ ಸಂಸ್ಥೆಯು ಬರುವ ಟೋಲ್ ಅದಾಯವನ್ನು ಒತ್ತೆಯಾಗಿರಿಸಿಕೊಂಡು ಬ್ಯಾಂಕ್‌ಗಳಲ್ಲಿ ಸಾಲ ಪಡೆದು, Core road network ರಸ್ತೆಗಳ ಅಭಿವೃದ್ಧಿಯನ್ನು ಕೈಗೊಳ್ಳಲು ಅನುವಾಗಲು ಕೆ.ಆರ್.ಡಿ.ಸಿ.ಎಲ್ ಸಂಸ್ಥೆಗೆ ಟೋಲ್ ಸಂಗ್ರಹಣೆ ಮಾಡಲು ಸರ್ಕಾರಿ ಆದೇಶ ಸಂ: |

| | | |
|---|---|---|
| | | ಲೋಇ 118 ಇಎಪಿ 2016, ಬೆಂಗಳೂರು, ದಿನಾಂಕ: 31-03-2017 ರಲ್ಲಿ ಅನುಮೋದನೆ ನೀಡಲಾಗಿದೆ.<br><br>ರಾಷ್ಟ್ರೀಯ ಹೆದ್ದಾರಿಗಳಲ್ಲಿ NHAI ವತಿಯಿಂದ Access Controlled Expressway ಗಳನ್ನು ನಿರ್ಮಿಸಲಾಗುತ್ತಿದ್ದು, ಇವುಗಳಲ್ಲಿ ವಾಹನ ಸಂಚಾರ ವೇಗ (Design Speed) ಹೆಚ್ಚಾಗಿದ್ದು, ಸದರಿ ರಸ್ತೆಗಳಲ್ಲಿ ಸುರಕ್ಷತಾ ದೃಷ್ಟಿಯಿಂದ ನಿಧಾನವಾಗಿ ಚಲಿಸುವ ಸ್ಥಳೀಯ ವಾಹನಗಳನ್ನು (Slow Moving Local Traffic) ವೇಗವಾಗಿ ಚಲಿಸುವ ವಾಹನಗಳಿಂದ (High Speed Through Traffic) ಪ್ರತ್ಯೇಕಿಸುವ ಸಲುವಾಗಿ ಗ್ರಾಮೀಣ ಪರಿಮಿತಿಯ ರಸ್ತೆಯ ಭಾಗಗಳಲ್ಲಿ ಸರ್ವೀಸ್ ರಸ್ತೆಗಳನ್ನು ನಿರ್ಮಿಸುವ ಅವಶ್ಯಕತೆ ಇರುತ್ತದೆ.<br><br>ಅದರೆ, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಟೋಲ್ ಸಂಗ್ರಹವಾಗುತ್ತಿರುವ ರಾಜ್ಯ ಹೆದ್ದಾರಿಗಳು ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳನ್ನು ಸಂಪರ್ಕಿಸುವ ರಸ್ತೆಗಳಾಗಿದ್ದು, ವಾಹನ ಸಾಂದ್ರತೆಗೆ ಅನುಗುಣವಾಗಿ ರಸ್ತೆಯ ಅಗಲವನ್ನು ನಿರ್ಧರಿಸಿದ್ದು, ವಾಹನ ಸಂಚಾರ ದಟ್ಟಣೆ ಕಡಿಮೆ ಇರುವ ಕಾರಣ ಸ್ಥಳೀಯ ಮತ್ತು Through Traffic ಗಳನ್ನು ಸರ್ವೀಸ್ ರಸ್ತೆಗಳನ್ನು ನಿರ್ಮಿಸುವ ಮೂಲಕ ಪ್ರತ್ಯೇಕಿಸುವ ಅವಶ್ಯಕತೆ ಕಂಡು ಬಂದಿರುವುದಿಲ್ಲ. ಆದ್ದರಿಂದ ಟೋಲ್ ಸಂಗ್ರಹಿಸುವ ರಾಜ್ಯ ಹೆದ್ದಾರಿಗಳಲ್ಲಿ ಸರ್ವೀಸ್ ರಸ್ತೆಯನ್ನು ಪರಿಗಣಿಸಿರುವುದಿಲ್ಲ. |
| ಇ) | ರಾಜ್ಯದ ಹೆದ್ದಾರಿಗಳನ್ನು ಟೋಲ್ ರಸ್ತೆಗಳನ್ನಾಗಿ ಮಾಡಲು ಇರುವ ನೀತಿ ಮತ್ತು ನಿಬಂಧನೆಗಳೇನು? (ಸರ್ಕಾರದ ಆದೇಶದ ಪ್ರತಿಯನ್ನು ಒದಗಿಸುವುದು) | ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ/06/ಇಎಪಿ/2012 (ಪಿ3) ದಿನಾಂಕ: 07-03-2015 ರ ಅನ್ವಯ ವಿವಿಧ ಮಾದರಿಯ ವಾಹನಗಳಿಗೆ ನಿಗಧಿಪಡಿಸಿರುವ ಮೂಲ ದರಗಳು ಈ ಕೆಳಕಂಡಂತಿರುತ್ತದೆ. |

| ಕ್ರ ಸಂ | ವಾಹನ ಮಾದರಿ | ಮೂಲ ದರ (ಕಿ.ಮೀ) |
|---|---|---|
| 1 | ಕಾರು/ಜೀಪು/ವ್ಯಾನು ಅಥವಾ ಲಘು ವಾಹನ | 0.65 |
| 2 | ಲಘು ವಾಣಿಜ್ಯ ವಾಹನ, ಲಘು ಗೂಡ್ಸ್ ವಾಹನ ಅಥವಾ ಮಿನಿ ಬಸ್ | 1.05 |
| 3 | ಬಸ್, ವಾಣಿಜ್ಯ ವಾಹನ (ಎರಡು ಆಕ್ಸಲ್) | 2.20 |

| | | |
|---|---|---|
| 4 | ಬಸ್, ವಾಣಿಜ್ಯ ವಾಹನ (ಮೂರು ಆಕ್ಸಲ್) | 2.24 |
| 5 | ಭಾರಿ ನಿರ್ಮಾಣ ಯಂತ್ರೋಪಕರಣ (HCM), ಅರ್ಥ್ ಮೂವಿಂಗ್ ಎಕ್ವಿಪ್‌ಮೆಂಟ್ (EME) ಅಥವಾ ಮಲ್ಟಿ ಆಕ್ಸಲ್ ವಾಹನ (ಒಂಗಿ) (ನಾಲ್ಕು ರಿಂದ ಆರು ಆಕ್ಸಲ್) | 3.45 |
| 6 | ಭಾರಿ ಗಾತ್ರದ ವಾಹನಗಳು (ಏಳು ಅಥವಾ ಹೆಚ್ಚಿನ ಆಕ್ಸಲ್‌ಗಳು) | 4.20 |

1) ಸದರಿ ಮೂಲ ದರಗಳನ್ನು ಅಧರಿಸಿ ಅಧಿಸೂಚನೆ ನಿಯಮಗಳ ಅನ್ವಯ ಟೋಲ್ ರಸ್ತೆಯ ಉದ್ದ, ಅಗಲ, ಬೈಪಾಸ್ ರಸ್ತೆಗಳು, ಟೋಲ್ ರಸ್ತೆಯಲ್ಲಿ 60ಮೀ ಗಿಂತ ಉದ್ದವಾಗಿರುವ ಸೇತುವೆಗಳು, ಇವುಗಳನ್ನು ಪರಿಗಣಿಸಿ ಆಯಾ ರಸ್ತೆಗೆ ಟೋಲ್ ಸುಂಕವನ್ನು ನಿಗಧಿಪಡಿಸಲಾಗುತ್ತದೆ.

2) ಸದರಿ ಮೂಲ ದರಗಳನ್ನು ಆಧಾರಿಸಿ ಪ್ರತಿ ವರ್ಷ ಏಪ್ರಿಲ್ 01 ರಂದು ಪರಿಷ್ಕೃತ ದರಗಳನ್ನು ನಿಗದಿಪಡಿಸಿ ಗೆಜೆಟ್ ಪ್ರಕಟಣೆಯನ್ನು ಹೊರಡಿಸಲಾಗುವುದು. ಮೂಲ ದರಗಳು 2007–08 ವರ್ಷಕ್ಕೆ ಅನ್ವಯವಾಗುತ್ತಿದ್ದು, ಪ್ರತಿ ವರ್ಷ ಈ ದರಗಳಿಗೆ ಶೇಕಡ 3 ರಷ್ಟು Adhoc ಹೆಚ್ಚಳ ಮತ್ತು WPI index ಆಧಾರಿತ ಹೆಚ್ಚಳವನ್ನು ಸೇರಿಸಿ ಪ್ರಸ್ತುತ ವರ್ಷಕ್ಕೆ ಅನ್ವಯವಾಗುವಂತೆ ಮೂಲ ದರಗಳನ್ನು ಪರಿಷ್ಕರಿಸಲಾಗುತ್ತದೆ.

3) ಮೂಲ ದರಗಳು ನಾಲ್ಕು ಪಥದ ರಸ್ತೆಗೆ ಅನ್ವಯವಾಗುತ್ತಿದ್ದು, ಟೋಲ್ ಸಂಗ್ರಹಿಸಬೇಕಾದ ರಸ್ತೆಯು ಎರಡು ಪಥದ ರಸ್ತೆಯಾಗಿದ್ದಲ್ಲಿ ಮೂಲ ದರದ ಶೇ. 70 ರಷ್ಟು ದರವು ಅನ್ವಯವಾಗುತ್ತದೆ.

4) ಟೋಲ್ ಸಂಗ್ರಹಿಸಬೇಕಾದ ರಸ್ತೆಯಲ್ಲಿ ಬೈಪಾಸ್ ಇದ್ದಲ್ಲಿ, ದರ ನಿಗಧಿಪಡಿಸುವಾಗ ಬೈಪಾಸ್ ಉದ್ದದ 1.5 ಪಟ್ಟು ಉದ್ದವನ್ನು ಪರಿಗಣಿಸಲಾಗುವುದು.

5) ಟೋಲ್ ಸಂಗ್ರಹಿಸಬೇಕಾದ ರಸ್ತೆಯಲ್ಲಿ 60 ಮೀಟರ್ ಮೀರಿದ ಸೇತುವೆ ಇದ್ದಲ್ಲಿ, ದರ ನಿಗಧಿಪಡಿಸುವಾಗ ಸೇತುವೆಯ 10 ಪಟ್ಟು ಉದ್ದವನ್ನು

| | | |
|---|---|---|
| | | ಪರಿಗಣಿಸಲಾಗುವುದು.<br>6) ಟೋಲ್ ದರಗಳಲ್ಲಿ Daily Pass, Monthly Pass, Local Pass ಗಳನ್ನು ಪಡೆಯುವುದರ ಮೂಲಕ ರಿಯಾಯಿತಿಯನ್ನು ರಸ್ತೆ ಬಳಕೆದಾರರು ಪಡೆಯಬಹುದಾಗಿದೆ.<br>7) ದ್ವಿಚಕ್ರ ಹಾಗೂ ತ್ರಿಚಕ್ರ ವಾಹನಗಳು, ಟ್ರ್ಯಾಕ್ಟರ್‌ಗಳು, ಎತ್ತಿನ ಗಾಡಿಗಳು ಮತ್ತು ಟ್ರೈಲರ್‌ಗಳಿಗೆ ಟೋಲ್ ಶುಲ್ಕದಿಂದ ವಿನಾಯಿತಿ ಇರುತ್ತದೆ. |

ಸಂಖ್ಯೆ:ಲೋಇ ಇ-162 ಇಎಪಿ 2021

(ಗೋವಿಂದ ಎಂ. ಕಾರಜೋಳ)
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಸಚಿವರು

**ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ. ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 2495 ಕ್ಕೆ ಪೂರಕ ಟಿಪ್ಪಣಿ**

---

ಅ) **ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ (ಕೆ.ಆರ್.ಡಿ.ಸಿ.ಎಲ್) ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆಶಿಪ್) ಸಂಸ್ಥೆಗಳಿಂದ ಅಭಿವೃದ್ಧಿ ಪಡಿಸಿರುವ** 19 ರಸ್ತೆಗಳಲ್ಲಿ ಬಳಕೆದಾರರ ಶುಲ್ಕವನ್ನು (User Fee) ಸಂಗ್ರಹಣೆ ಮಾಡಲು ಸರ್ಕಾರದಿಂದ ಅನುಮೋದನೆ ದೊರೆತಿದ್ದು, ಈ ಪೈಕಿ 10 ರಸ್ತೆಗಳಲ್ಲಿ ಶುಲ್ಕ ಸಂಗ್ರಹಣೆಯಾಗುತ್ತಿದೆ (1 ರಸ್ತೆಯಲ್ಲಿ ಇಲಾಖಾ ವತಿಯಿಂದ ಶುಲ್ಕ ಸಂಗ್ರಹಣೆ ಮಾಡಲಾಗುತ್ತಿದೆ),
1 ರಸ್ತೆಯಲ್ಲಿ ಶುಲ್ಕ ಸಂಗ್ರಹಣೆ ಪ್ರಾರಂಭವಾಗಬೇಕಾಗಿದ್ದು, ಉಳಿದ 9 ರಸ್ತಗಳಿಗೆ ಟೆಂಡರ್ ಆಹ್ವಾನಿಸಲಾಗಿದೆ. (ವಿವರಗಳನ್ನು ಅನುಬಂಧ –1 ರಲ್ಲಿ ನೀಡಲಾಗಿದೆ)

ಆ) **ಹುಡ್ಕೋ (HUDCO) ಸಾಲದ ನೆರವಿನಲ್ಲಿ ಅಭಿವೃದ್ಧಿ ಪಡಿಸಲಾಗಿರುವ** 2 ರಸ್ತೆಯ ಪೈಕಿ 1 ರಸ್ತೆಯಲ್ಲಿ ಶುಲ್ಕ ಸಂಗ್ರಹಣೆಯಾಗುತ್ತಿದೆ, ಉಳಿದ 1 ರಸ್ತೆಗೆ ಟೆಂಡರ್ ಆಹ್ವಾನಿಸಲಾಗಿದೆ (ವಿವರಗಳನ್ನು ಅನುಬಂಧ –1 ರಲ್ಲಿ ನೀಡಲಾಗಿದೆ)

ಇ) **ಕೆ.ಆರ್.ಡಿ.ಸಿ.ಎಲ್ ವತಿಯಿಂದ ಕೈಗೊಂಡ 4 ರಸ್ತೆಗಳಲ್ಲಿ ಪಿಪಿಪಿ–ಡಿಬಿಎಫ್ಓಟಿ–ವಿಜಿಎಫ್** ರಸ್ತೆಗಳಲ್ಲಿ ನಿರ್ಮಾಣ ವೆಚ್ಚವನ್ನು ರಿಯಾಯಿತಿದಾರರು ಹೂಡಿಕೆಮಾಡಿ ಅಭಿವೃದ್ಧಿ ಪಡಿಸಿದ್ದು, ಸರ್ಕಾರದ ಅನುಮತಿಯಂತೆ ಸದರಿ 4 ರಸ್ತೆಗಳಲ್ಲಿ ರಿಯಾಯಿತಿದಾರರು ನಿರ್ಧಿಷ್ಟ ಅವಧಿಯವರೆಗೆ ಶುಲ್ಕ ಸಂಗ್ರಹಣೆ ಮಾಡುವರು. (ವಿವರಗಳನ್ನು ಅನುಬಂಧ –1 ರಲ್ಲಿ ನೀಡಲಾಗಿದೆ)

ಈ) **ವಿಶ್ವಬ್ಯಾಂಕ್ ನೆರವಿನ ಯೋಜನೆಯಡಿಯಲ್ಲಿ ಕೆ.ಆರ್.ಡಿ.ಸಿ.ಎಲ್ ನಿಂದ ಅಭಿವೃದ್ಧಿ ಪಡಿಸಲಾದ** 6 ರಸ್ತೆಗಳ ಪೈಕಿ 5 ರಸ್ತೆಗಳಲ್ಲಿ ಬಳಕೆದಾರರ ಶುಲ್ಕ ಸಂಗ್ರಹಣೆಯಾಗುತ್ತಿದೆ. ಉಳಿದ 1 ರಸ್ತೆಗೆ ಶುಲ್ಕ ಸಂಗ್ರಹಣೆ ಪ್ರಾರಂಭಿಸಬೇಕಾಗಿರುತ್ತದೆ. (ವಿವರಗಳನ್ನು ಅನುಬಂಧ –1 ರಲ್ಲಿ ನೀಡಲಾಗಿದೆ)

ಈ ಕೆಳಕಂಡ ವಾಹನಗಳಿಗೆ ರಾಜ್ಯ ಹೆದ್ದಾರಿಗಳಲ್ಲಿ ಟೋಲ್ ಪಾವತಿಯಿಂದ ವಿನಾಯತಿ ನೀಡಲಾಗಿದೆ.

1. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ಎಲ್ಲಾ ವಾಹನಗಳು, ರಾಜ್ಯ ಸರ್ಕಾರ ಸ್ವಾಮ್ಯ ಸಂಸ್ಥೆಗಳ ವಾಹನಗಳು ಮತ್ತು ಆಧಿಕೃತ ಪರವಾನಗಿ **(Pass)** ಹೊಂದಿದ್ದು ಸರ್ಕಾರದ ಕಾರ್ಯಗಳಿಗೆ ಉಪಯೋಗಿಸುವ ಖಾಸಗಿ ವಾಹನಗಳು, ಹಳದಿ ರಿಜಿಸ್ಟ್ರೇಷನ್ ನಂಬರ್ ಹೊಂದಿರುವ ವಾಹನಗಳೂ ಸೇರಿದಂತೆ ಆದರೆ ವಾಣಿಜ್ಯ ಮತ್ತು ಸರಕು ಸಾಗಾಣಿಗೆ ವಾಹನಗಳನ್ನು ಹೊರತುಪಡಿಸಿ
2. ಲೋಕಸಭೆಯ ಮಾನ್ಯ ಸದಸ್ಯರುಗಳ ವಾಹನ ಮತ್ತು ವಿಧಾನ ಸಭೆಯ ಮಾನ್ಯ ಸದಸ್ಯರುಗಳ ವಾಹನ
3. ರಕ್ಷಣಾ ಇಲಾಖೆಯ ವಾಹನಗಳು, ಭಾರತ ಅಂಚೆ ಮತ್ತು ತಂತಿ ಇಲಾಖೆ ಹಾಗೂ ಕೇಂದ್ರ ಸರ್ಕಾರದ ಸೇವೆಯಲ್ಲಿರುವ ವಾಹನಗಳು
4. ಕೇಂದ್ರ ಮತ್ತು ರಾಜ್ಯ ಸರ್ಕಾರದ ಶಸ್ತ್ರ ಸಜ್ಜಿತ ಸಮವಸ್ತ್ರ ಹೊಂದಿರುವ ಸೈನಿಕ ವಾಹನಗಳು ಹಾಗೂ ಅರೆ ಸೈನಿಕ ವಾಹನಗಳು ಮತ್ತು ಆರಕ್ಷಕರ ವಾಹನಗಳು
5. ಅಂತರ ರಾಷ್ಟ್ರೀಯ/ರಾಷ್ಟ್ರೀಯ ಪ್ರತಿಷ್ಠಿತ ಪುರಸ್ಕಾರ ಪಡೆದು ಅಂತಹ ಪುರಸ್ಕೃತದಾರರು ಅಧಿಕೃತ ಅಥವಾ ಸಕ್ಷಮ ಪ್ರಾಧಿಕರದಿಂದ ಧೃಡೀಕರಣ ಹೊಂದಿರುವ ಭಾವ ಚಿತ್ರವಿರುವ ಗುರುತಿನ ಚೀಟಿಯನ್ನು ನೀಡಿದಲ್ಲಿ ಅವರ ವಾಹನಗಳು

6. ಅಧಿಕೃತ ಅಥವಾ ಸಕ್ಷಮ ಪ್ರಾಧಿಕಾರದಿಂದ ನೀಡಲಾಗಿರುವ ಭಾವ ಚಿತ್ರವಿರುವ ಗುರುತಿನ ಚೀಟಿಯನ್ನು ಸಲ್ಲಿಸುವ ಸ್ವಾತಂತ್ರ ಹೋರಾಟಗಾರರಿಗೆ ಸೇರಿದ ವಾಹನ ಮತ್ತು ಮಾನ್ಯತೆ ಪಡೆದ (Accredited) ಪತ್ರಕರ್ತರ ವಾಹನಗಳು.
   1. ಅಂಬ್ಯುಲೆನ್ಸ್ ವಾಹನಗಳು.
   2. ಬೆಂಕಿ ನಂದಿಸುವ ವಾಹನಗಳು (fire fighting vehicles)
   3. ಶವ ಸಾಗಿಸುವ ವಾಹನಗಳು
7. ದ್ವಿಚಕ್ರ ಮತ್ತು ತ್ರಿಚಕ್ರ ವಾಹನಗಳು, ಜಾನುವಾರಗಳಿಂದ ಎಳೆಯಲ್ಪಡುವ ವಾಹನಗಳು ವ್ಯವಸಾಯೋತ್ಪನ್ನಗಳನ್ನು ಸಾಗಿಸುವ ವಾಹನಗಳು ಹಾಗೂ ಟ್ರಾಕ್ಟರ್‌ಗಳು – ಈ ವಾಹನಗಳಿಗೆ ಟೋಲ್ ಕರವನ್ನು ವಿಧಿಸಲಾಗುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ/06/ಇಎಪಿ/2012 (ಪಿ3) ದಿನಾಂಕ: 07-03-2015 ರ ಅನ್ವಯ ವಿವಿಧ ಮಾದರಿಯ ವಾಹನಗಳಿಗೆ ನಿಗಧಿಪಡಿಸಿರುವ ಮೂಲ ದರಗಳು ಈ ಕೆಳಕಂಡಂತಿರುತ್ತದೆ.

| ಕ್ರಮ ಸಂಖ್ಯೆ | ವಾಹನ ಮಾದರಿ | ಮೂಲ ದರ (ಕಿ.ಮೀ) |
|---|---|---|
| 1 | ಕಾರು/ಜೀಪು/ವ್ಯಾನು ಅಥವಾ ಲಘು ವಾಹನ | 0.65 |
| 2 | ಲಘು ವಾಣಿಜ್ಯ ವಾಹನ, ಲಘು ಗೂಡ್ಸ್ ವಾಹನ ಅಥವಾ ಮಿನಿ ಬಸ್ | 1.05 |
| 3 | ಬಸ್, ವಾಣಿಜ್ಯ ವಾಹನ (ಎರಡು ಆಕ್ಸಲ್) | 2.20 |
| 4 | ಬಸ್, ವಾಣಿಜ್ಯ ವಾಹನ (ಮೂರು ಆಕ್ಸಲ್) | 2.24 |
| 5 | ಭಾರಿ ನಿರ್ಮಾಣ ಯಂತ್ರೋಪಕರಣ (HCM), ಅರ್ಥ್ ಮೂವಿಂಗ್ ಎಕ್ವಿಪ್‌ಮೆಂಟ್ (EME) ಅಥವಾ ಮಲ್ಟಿ ಆಕ್ಸಲ್ ವಾಹನ (MAV) (ನಾಲ್ಕು ರಿಂದ ಆರು ಆಕ್ಸಲ್) | 3.45 |
| 6 | ಭಾರಿ ಗಾತ್ರದ ವಾಹನಗಳು (ಏಳು ಅಥವಾ ಹೆಚ್ಚಿನ ಆಕ್ಸಲ್‌ಗಳು) | 4.20 |

ಉ) ಸದರಿ ಮೂಲ ದರಗಳನ್ನು ಅಧರಿಸಿ ಅಧಿಸೂಚನೆ ನಿಯಮಗಳ ಅನ್ವಯ ಟೋಲ್ ರಸ್ತೆಯ ಉದ್ದ, ಅಗಲ, ಬೈಪಾಸ್ ರಸ್ತೆಗಳು, ಟೋಲ್ ರಸ್ತೆಯಲ್ಲಿ 60ಮೀ ಗಿಂತ ಉದ್ದವಾಗಿರುವ ಸೇತುವೆಗಳು, ಇವುಗಳನ್ನು ಪರಿಗಣಿಸಿ ಆಯಾ ರಸ್ತೆಗೆ ಟೋಲ್ ಸುಂಕವನ್ನು ನಿಗಧಿಪಡಿಸಲಾಗುತ್ತದೆ.

ಊ) ಸದರಿ ಮೂಲ ದರಗಳನ್ನು ಆಧಾರಿಸಿ ಪ್ರತಿ ವರ್ಷ ಏಪ್ರಿಲ್ 01 ರಂದು ಪರಿಷ್ಕೃತ ದರಗಳನ್ನು ನಿಗದಿಪಡಿಸಿ ಗೆಜೆಟ್ ಪ್ರಕಟಣೆಯನ್ನು ಹೊರಡಿಸಲಾಗುವುದು. ಮೂಲ ದರಗಳು 2007-08 ವರ್ಷಕ್ಕೆ ಅನ್ವಯವಾಗುತ್ತಿದ್ದು, ಪ್ರತಿ ವರ್ಷ ಈ ದರಗಳಿಗೆ ಶೇಕಡ 3 ರಷ್ಟು Adhoc ಹೆಚ್ಚಳ ಮತ್ತು WPI index ಆಧಾರಿತ ಹೆಚ್ಚಳವನ್ನು ಸೇರಿಸಿ ಪ್ರಸ್ತುತ ವರ್ಷಕ್ಕೆ ಅನ್ವಯವಾಗುವಂತೆ ಮೂಲ ದರಗಳನ್ನು ಪರಿಷ್ಕರಿಸಲಾಗುತ್ತದೆ.

ಋ) ಮೂಲ ದರಗಳು ನಾಲ್ಕು ಪಥದ ರಸ್ತೆಗೆ ಅನ್ವಯವಾಗುತ್ತಿದ್ದು, ಟೋಲ್ ಸಂಗ್ರಹಿಸಬೇಕಾದ ರಸ್ತೆಯು ಎರಡು ಪಥದ ರಸ್ತೆಯಾಗಿದ್ದಲ್ಲಿ ಮೂಲ ದರದ ಶೇ. 70 ರಷ್ಟು ದರವು ಅನ್ವಯವಾಗುತ್ತದೆ.

ಎ) ಟೋಲ್ ಸಂಗ್ರಹಿಸಬೇಕಾದ ರಸ್ತೆಯಲ್ಲಿ ಬೈಪಾಸ್ ಇದ್ದಲ್ಲಿ, ದರ ನಿಗಧಿಪಡಿಸುವಾಗ ಬೈಪಾಸ್ ಉದ್ದದ 1.5 ಪಟ್ಟು ಉದ್ದವನ್ನು ಪರಿಗಣಿಸಲಾಗುವುದು.

ಏ) ಟೋಲ್ ಸಂಗ್ರಹಿಸಬೇಕಾದ ರಸ್ತೆಯಲ್ಲಿ 60 ಮೀಟರ್ ಮೀರಿದ ಸೇತುವೆ ಇದ್ದಲ್ಲಿ, ದರ ನಿಗಧಿಪಡಿಸುವಾಗ ಸೇತುವೆಯ 10 ಪಟ್ಟು ಉದ್ದವನ್ನು ಪರಿಗಣಿಸಲಾಗುವುದು.

ಐ) ಟೋಲ್ ದರಗಳಲ್ಲಿ Daily Pass, Monthly Pass, Local Pass ಗಳನ್ನು ಪಡೆಯುವುದರ ಮೂಲಕ ರಿಯಾಯಿತಿಯನ್ನು ರಸ್ತೆ ಬಳಕೆದಾರರು ಪಡೆಯಬಹುದಾಗಿದೆ.

ಒ) ದ್ವಿಚಕ್ರ ಹಾಗೂ ತ್ರಿಚಕ್ರ ವಾಹನಗಳು, ಟ್ರ್ಯಾಕ್ಟರ್‌ಗಳು, ಎತ್ತಿನ ಗಾಡಿಗಳು ಮತ್ತು ಟ್ರೈಲರ್‌ಗಳಿಗೆ ಟೋಲ್ ಶುಲ್ಕದಿಂದ ವಿನಾಯಿತಿ ಇರುತ್ತದೆ.

## ಅನುಬಂಧ- (ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:350 (2495)

ಮಾನ್ಯ ಸದಸ್ಯರ ಹೆಸರು: ಶ್ರೀ. ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

I. **ಕೆ.ಆರ್.ಡಿ.ಸಿ.ಎಲ್ ಹಾಗೂ ಕೆಶಿಫ್ ಸಂಸ್ಥೆಗಳಿಂದ ಅಭಿವೃದ್ಧಿ ಪಡಿಸಿರುವ** ಈ ಕೆಳಕಂಡ 19 ರಸ್ತೆಗಳಲ್ಲಿ ಬಳಕೆದಾರರ ಶುಲ್ಕವನ್ನು (User Fee) ಸಂಗ್ರಹಣೆ ಮಾಡಲು ಸರ್ಕಾರಿ ಆದೇಶ ಸಂಖ್ಯೆ :ಲೋಇ 118 ಇಎಪಿ 2016 ಬೆಂಗಳೂರು ದಿನಾಂಕ:31-03-2017 ರಲ್ಲಿ ಅನುಮೋದನೆ ನೀಡಲಾಗಿದೆ. ವಿವರಗಳು ಕೆಳಕಂಡಂತೆ ಇರುತ್ತದೆ.

1. **ಶುಲ್ಕ ಸಂಗ್ರಹಣಾ ಪ್ರಾರಂಭವಾಗಿರುವ ರಸ್ತೆಗಳು**

| ಕ್ರಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಟೋಲ್ ಗುತ್ತಿಗೆದಾರರ ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿಗಳಲ್ಲಿ) | ಟೋಲ್ ಗುತ್ತಿಗೆದಾರರ ಹೆಸರು | ಟೋಲ್ ಪ್ರಾರಂಭಿಸಿದ ದಿನಾಂಕ | ಟೋಲ್ ಗುತ್ತಿಗೆಯ ಅವಧಿ |
|---|---|---|---|---|---|---|---|
| 1 | ಧಾರವಾಡ-ಕರಡಿಗುಡ್ಡ-ಸವದತ್ತಿ ರಸ್ತೆ | SH-34 | 36.00 | 2.57 | ಮೆ॥ ವಿನಯ್ ಲಾಡ್ ಎಂಟರ್ ಪ್ರೈಸಸ್ | 18-02-2019 | 3 ವರ್ಷ |
| 2 | ಹೊಸಕೋಟೆಯಿಂದ ಚಿಂತಾಮಣಿ ಬೈಪಾಸ್ ರಸ್ತೆ (ಇಲಾಖಾ ವತಿಯಿಂದ ಶುಲ್ಕ ಸಂಗ್ರಹಣೆ ಮಾಡಲಾಗುತ್ತಿದೆ) | SH-49 | 52.46 | 10.85 | ಇಲಾಖಾ ವತಿಯಿಂದ | 25-02-2020 | - |
| 3 | ಹಾವೇರಿ-ಅಕ್ಕಿಆಲೂರು-ಹನಗಲ್ ರಸ್ತೆ | SH-02 | 31.78 | 1.57 | ಶ್ರೀ. ವಿನೋದ್ ಕಾರ್ವಿ | 30-11-2020 | 3 ವರ್ಷ |
| 4 | ಮುದೋಳ್-ಚಿಕ್ಕೋಡಿ-ನಿಪ್ಪಾಣಿ ರಸ್ತೆ | SH-18 | 107.94 | 7.26 | ಮೆ॥ ವಿನಯ್ ಲಾಡ್ ಎಂಟರ್ ಪ್ರೈಸಸ್ | 19-10-2019 | 3 ವರ್ಷ |
| 5 | ಶೆಲ್ವಾಡಿ-ಮುಂಡರಗಿ ರಸ್ತೆ | SH-45 | 64.21 | 2.78 | ಮೆ॥ ಕೇಸರ್ ಇನ್‌ವೆಸ್ಟ್‌ಮೆಂಟ್ಸ್ | 16-01-2020 | 3 ವರ್ಷ |
| 6 | ಹುಬ್ಬಳ್ಳಿ-ಕುಂದಗೋಳ-ಲಕ್ಷ್ಮೇಶ್ವರ ರಸ್ತೆ | SH-73 | 42.96 | 2.30 | ಮೆ॥ ಮಿತ್ರಾ ಇನ್ಫ್ರಾ ಸಲ್ಯೂಷನ್ಸ್ | 21-01-2020 | 3 ವರ್ಷ |
| 7 | ಮುದಗಲ್-ತಾವರೆಕೆರೆ-ಗಂಗಾವತಿ ರಸ್ತೆ | SH-29 | 74.1 | 1.65 | ಮೆ॥ ಮಿತ್ರಾ ಇನ್ಫ್ರಾ ಸಲ್ಯೂಷನ್ಸ್ | 26-08-2020 | 3 ವರ್ಷ |
| 8 | ಮಾಗಡಿ-ಪಾವಗಡ-ಎಪಿ ಬಾರ್ಡರ್ ರಸ್ತೆ | SH-3 | 149.50 | 7.20 | ಮೆ॥ ಮಿತ್ರಾ ಇನ್ಫ್ರಾ ಸಲ್ಯೂಷನ್ಸ್ | 18-06-2020 | 3 ವರ್ಷ |

| | | | | | | | |
|---|---|---|---|---|---|---|---|
| 9 | ಮಳವಳ್ಳಿ–ಮದ್ದೂರು–ಕೊರಟಗೆರೆ ರಸ್ತೆ | SH–33 | 135.30 | 8.75 | ಮೆ॥ ಮಿತ್ರಾ ಇನ್ಫ್ರಾ ಸಲ್ಯೂಷನ್ಸ್ | 28–05–2020 | 3 ವರ್ಷ |
| 10 | ಸಿಂಧನೂರು–ತಾವರೆಕೆರೆ–ಕುಷ್ಟಗಿ ರಸ್ತೆ | SH-30 | 64.30 | 2.95 | ಮೆ॥ ಕೇಸರ್ ಇನ್‌ವೆಸ್ಟ್‌ಮೆಂಟ್ಸ್ | 06–05–2020 | 3 ವರ್ಷ |
| ಒಟ್ಟು | | | | **47.88** | | | |

2. <u>ಶುಲ್ಕ ಸಂಗ್ರಹಣಾ ಪ್ರಾರಂಭವಾಗಬೇಕಾಗಿರುವ ರಸ್ತೆಗಳು</u>

| ಕ್ರ ಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಟೋಲ್ ಗುತ್ತಿಗೆದಾರರ ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿಗಳಲ್ಲಿ) | ಟೋಲ್ ಗುತ್ತಿಗೆದಾರರ ಹೆಸರು | ಟೋಲ್ ಗುತ್ತಿಗೆಯ ಅವಧಿ |
|---|---|---|---|---|---|---|
| 1 | ದಾವಣಗೆರೆ – ಬೀರೂರು ರಸ್ತೆ | SH-76 | 105.63 | 3.52 | ಶ್ರೀ. ರವಿ ಮೋಕ್ಷಿತ್ | 3 ವರ್ಷ |

3. <u>ಟೆಂಡರ್ ಆಹ್ವಾನಿಸಲಾಗಿರುವ ರಸ್ತೆಗಳು.</u>

| ಕ್ರಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಅಂದಾಜು ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿ ಗಳಲ್ಲಿ) | ಟೋಲ್ ಗುತ್ತಿಗೆಯ ಅವದಿ |
|---|---|---|---|---|---|
| 1 | ಪಡುಬಿದ್ರಿ –ಕಾರ್ಕಳ ರಸ್ತೆ | SH-1 | 27.8 | 2.27 | 3 ವರ್ಷ |
| 2 | ಗುಬ್ಬಿ – ಸಿ.ಎಸ್ ಪುರ ರಸ್ತೆ | SH-84 | 49.03 | 0.80 | 3 ವರ್ಷ |
| 3 | ಎಡೆಯೂರು – ಕೌಡ್ಲೆ – ಮಂಡ್ಯ ರಸ್ತೆ ರಸ್ತೆ | SH-84 | 57.59 | 0.15 | 3 ವರ್ಷ |
| 4 | ಹಾನಗಲ್ – ತಡಸ್ ರಸ್ತೆ | SH-1 | 43.46 | 1.06 | 3 ವರ್ಷ |

| | | | | | |
|---|---|---|---|---|---|
| 5 | ಶಿವಮೊಗ್ಗ – ಶಿಕಾರಿಪುರ – ಹಾನಗಲ್ ರಸ್ತೆ | SH-57 | 121.41 | 12.83 | 3 ವರ್ಷ |
| 6 | ತಿಂಥಣಿ – ದೇವದುರ್ಗ – ಕಲ್ಮಲಾ ರಸ್ತೆ | SH-61 & SH-15 | 73.31 | 3.23 | 3 ವರ್ಷ |
| 7 | ಸವದತ್ತಿ – ಬಾದಾಮಿ – ಕಮಟಗಿ ರಸ್ತೆ | SH-34 & SH-14 | 127.28 | 2.76 | 3 ವರ್ಷ |
| 8 | ಬಳ್ಳಾರಿ – ಮೋಕಾ ರಸ್ತೆ | SH-132 | 25.27 | 1.74 | 3 ವರ್ಷ |
| 9 | ಹೊಸಕೋಟೆಯಿಂದ ಚಿಂತಾಮಣಿ ಬೈಪಾಸ್ ರಸ್ತೆ | SH-82 | 52.46 | 10.40 | 3 ವರ್ಷ |
| | | | ಒಟ್ಟು:– | 35.24 | |

II. ಹುಡ್ಕೋ (HUDCO) ಸಾಲದ ನೆರವಿನಲ್ಲಿ ಅಭಿವೃದ್ಧಿ ಪಡಿಸಲಾಗಿರುವ ಈ ಕೆಳಕಂಡ ರಸ್ತೆಯಲ್ಲಿ ಶುಲ್ಕ ಸಂಗ್ರಹಣೆ ಮಾಡಲಾಗುತ್ತಿದೆ.

1. ಶುಲ್ಕ ಸಂಗ್ರಹಣಾ ಪ್ರಾರಂಭವಾಗಿರುವ ರಸ್ತೆಗಳು

| ಕ್ರಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಟೋಲ್ ಗುತ್ತಿಗೆದಾರರ ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿಗಳಲ್ಲಿ) | ಟೋಲ್ ಗುತ್ತಿಗೆದಾರರ ಹೆಸರು | ಟೋಲ್ ಪ್ರಾರಂಭಿಸಿದ ದಿನಾಂಕ | ಟೋಲ್ ಗುತ್ತಿಗೆಯ ಅವಧಿ |
|---|---|---|---|---|---|---|---|
| 1 | ಹೊಸಪೇಟೆ–ಸಂಡೂರು ರಸ್ತೆ | SH-49 | 27.10 | 2.17 | ಮೆ॥ ಜೆ.ಕೆ.ಎಲ್ ಸ್ಟೋನ್ | 01–08–2020 | 3 ವರ್ಷ |

2. ಪರಿಷ್ಕೃತ ದಾಸ್ತಾವೇಜು ( Revised RFP) ಅಳವಡಿಸಿ ಟೆಂಡರ್ ಆಹ್ವಾನಿಸ ಬೇಕಾಗಿರುವ ರಸ್ತೆಗಳು.

| ಕ್ರಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಅಂದಾಜು ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿಗಳಲ್ಲಿ) | ಟೋಲ್ ಗುತ್ತಿಗೆಯ ಅವಧಿ |
|---|---|---|---|---|---|
| 1 | ಕೂಡ್ಲಿಗಿ – ಸಂಡೂರು – ತೋರಣಗಲ್ಲು ರಸ್ತೆ | SH-40 | 39.60 | 5.57 | 3 ವರ್ಷ |

III. ಕರಅನಿನಿ ವತಿಯಿಂದ ಕೈಗೊಂಡ ಈ ಕೆಳಕಂಡ ಪಿಪಿಪಿ-ಡಿಬಿಎಫ್‌ಓಟಿ-ವಿಜಿಎಫ್ ರಸ್ತೆಗಳಲ್ಲಿ ನಿರ್ಮಾಣ ವೆಚ್ಚವನ್ನು ರಿಯಾಯಿತಿದಾರರು ಹೂಡಿಕೆಮಾಡಿ ಅಭಿವೃದ್ಧಿ ಪಡಿಸಿದ್ದು, ಸರ್ಕಾರದ ಅನುಮತಿಯಂತೆ ಸದರಿ ರಸ್ತೆಗಳಲ್ಲಿ ರಿಯಾಯಿತಿದಾರು ನಿರ್ಧಿಷ್ಟ ಅವಧಿಯ ವರೆಗೆ ಶುಲ್ಕ ವಸೂಲಾತಿ ಮಾಡುವರು.

| ಕ್ರಸಂ | ರಸ್ತೆಯ ಹೆಸರು | ಟೋಲ್ ಪ್ರಾರಂಭಿಸಿದ ದಿನಾಂಕ | ರಿಯಾಯಿತಿ ಅವಧಿ |
|---|---|---|---|
| 1 | ಯಲಹಂಕ-ಆಂಧ್ರ ಪ್ರದೇಶ ಗಡಿ ರಸ್ತೆ | 19-09-2018 | 21 ವರ್ಷ |
| 2 | ಗಿಣಿಗೆರೆ-ಗಂಗಾವತಿ ರಸ್ತೆ | 07-09-2015 | 23 ವರ್ಷ |
| 3 | ಧಾರವಾಡ-ರಾಮನಗರ ರಸ್ತೆ | 27-08-2013 | 29 ವರ್ಷ |
| 4 | ವಾಗ್ದಾರಿ-ರಿಬ್ಬನಪಲ್ಲಿ ರಸ್ತೆ | 18-18-2012 | 30 ವರ್ಷ |

IV. ವಿಶ್ವಬ್ಯಾಂಕ್ ನೆರವಿನ ಯೋಜನೆಯಡಿಯಲ್ಲಿ ಕೆ.ಆರ್.ಡಿ.ಸಿ.ಎಲ್ ನಿಂದ ಅಭಿವೃದ್ಧಿ ಪಡಿಸಲಾದ ಈ ಕೆಳಕಂಡ 6 ರಸ್ತೆಗಳಲ್ಲಿ ಬಳಕೆದಾರರ ಶುಲ್ಕವನ್ನು ಸಂಗ್ರಹಿಸಲು ಸರ್ಕಾರಿ ಆದೇಶ ಸಂಖ್ಯೆ: ಲೋಇ76 ಇಎಪಿ2014 ಬೆಂಗಳೂರು ದಿನಾಂಕ: 23-03-2016 ರಲ್ಲಿ ಅನುಮೋದನೆ ನೀಡಲಾಗಿರುತ್ತದೆ. ವಿವರಗಳು ಕೆಳಗಿನಂತೆ ಇರುತ್ತದೆ.

1. ಶುಲ್ಕ ಸಂಗ್ರಹಣಾ ಪ್ರಾರಂಭವಾಗಿರುವ ರಸ್ತೆಗಳು

| ಕ್ರಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಟೋಲ್ ಗುತ್ತಿಗೆದಾರರ ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿಗಳಲ್ಲಿ) | ಟೋಲ್ ಗುತ್ತಿಗೆದಾರರ ಹೆಸರು | ಟೋಲ್ ಪ್ರಾರಂಭಿಸಿದ ದಿನಾಂಕ | ಟೋಲ್ ಗುತ್ತಿಗೆಯ ಅವಧಿ |
|---|---|---|---|---|---|---|---|
| 1 | ಬಾಗೆವಾಡಿ-ಸವದತ್ತಿ ರಸ್ತೆ | SH-1,30,31,73 | 63.29 | 2.04 | ಶ್ರೀ. ಕೆ.ಎಂ. ಜ್ಯೋತಿ ಪ್ರಕಾಶ್ | 27-12-2019 | 3 ವರ್ಷ |
| 2 | ಹಾಸನ-ಪಿರಿಯಾಪಟ್ಟಣ ರಸ್ತೆ | SH-21 | 73.69 | 3.15 | ಮೆ॥ ಮಿತ್ರಾ ಇನ್ಫ್ರಾ ಸಲ್ಯೂಷನ್ಸ್ | 23-01-2020 | 3 ವರ್ಷ |
| 3 | ಹಿರೇಕೆರೂರು-ರಾಣೆಬೆನ್ನೂರು ರಸ್ತೆ | SH-62 &78 | 55.69 | 1.10 | ಶ್ರೀ. ಕೆ.ಎಂ. ಜ್ಯೋತಿ ಪ್ರಕಾಶ್ | 23-01-2020 | 3 ವರ್ಷ |

| | | | | | | | |
|---|---|---|---|---|---|---|---|
| 4 | ಮುಂಡರಗಿ–ಹರಪ್ಪನಹಳ್ಳಿ ರಸ್ತೆ | SH-45 &47 | 51.21 | 2.03 | ಶ್ರೀ. ಕೆ.ಎಂ. ಹಂಚಿನಾಳ್ | 13–12–2019 | 3 ವರ್ಷ |
| 5 | ಹುನಗುಂದ–ತಾಳಿಕೋಟೆ ರಸ್ತೆ | SH-41 &60 | 56.99 | 1.07 | ಮೆ॥ ಮಿತ್ರಾ ಇನ್ಫ್ರಾ ಸಲ್ಯೂಷನ್ಸ್ | 31–12–2019 | 3 ವರ್ಷ |
| | | | ಒಟ್ಟು:- | 9.39 | | | |

2. ಶುಲ್ಕ ಸಂಗ್ರಹಣಾ ಪ್ರಾರಂಭವಾಗಬೇಕಾಗಿರುವ ರಸ್ತೆಗಳು

| ಕ್ರ.ಸಂ | ರಸ್ತೆಯ ಹೆಸರು | ರಾಜ್ಯ ಹೆದ್ದಾರಿ ಸಂಖ್ಯೆ | ರಸ್ತೆಯ ಉದ್ದ (ಕಿ.ಮೀ) | ಟೋಲ್ ಗುತ್ತಿಗೆದಾರರ ವಾರ್ಷಿಕ ಸಂದಾಯ ಮೊತ್ತ (ರೂ.ಕೋಟಿಗಳಲ್ಲಿ) | ಟೋಲ್ ಗುತ್ತಿಗೆದಾರರ ಹೆಸರು | ಟೋಲ್ ಗುತ್ತಿಗೆಯ ಅವಧಿ |
|---|---|---|---|---|---|---|
| 1 | ಬೀದರ್ – ಚಿಂಚೋಳಿ ರಸ್ತೆ | SH-15 | 60.02 | 2.50 | ಮೆ॥ ಜೆ.ಕೆ.ಎಲ್ ಸ್ಟೋನ್ | 3 ವರ್ಷ |

(signature) 24/3/21
ಮುಖ್ಯ ಇಂಜಿನಿಯರ್
ಕ.ರ.ಅ.ನಿ.ನಿ, ಬೆಂಗಳೂರು